# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **6 (116)**
ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 13.12.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | 01.08.2008ರ ನಂತರ ನೇಮಕವಾದ ಪ್ರೌಢಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಅನುದಾನಿತ ಶಿಕ್ಷಣ ಸಂಸ್ಥೆಗಳ ಶಿಕ್ಷಕರುಗಳಿಗೆ ಇನ್‌ಕ್ರಿಮೆಂಟ್ ಅನ್ನು ಮೂಲ ವೇತನದಲ್ಲಿ ಸೇರಿಸುವಲ್ಲಿ ಅನ್ಯಾಯಕ್ಕೆ ಒಳಗಾಗಿದ್ದಾರೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ; ನಿಯಮಗಳನ್ನು ರೂಪಿಸಿದ ಸರ್ಕಾರವೇ ನಿಯಮಗಳ ನೆಪವೊಡ್ಡಿ ಇವರಿಗೆ ಅನ್ಯಾಯ ಮಾಡುವುದು ಸರಿಯೇ; | ಸರ್ಕಾರಿ ಆದೇಶ ಸಂಖ್ಯೆ: ಇಡಿ 255 ಎಸ್‌ಎಲ್‌ಬಿ 2016, ದಿನಾಂಕ:23/07/2018ರಲ್ಲಿ ದಿನಾಂಕ:01/08/2008ರ ನಂತರ ನೇಮಕಾತಿ ಹೊಂದಿದ ಸಹ ಶಿಕ್ಷಕರುಗಳಿಗೆ ವಿಶೇಷ ಭತ್ಯೆ ರೂ.400/-ಗಳನ್ನು ಮಂಜೂರು ಮಾಡಲು ನಿಯಮಗಳಲ್ಲಿ ಅವಕಾಶವಿಲ್ಲದಿರುವುದರಿಂದ ದಿನಾಂಕ: 01/08/2008ರ ನಂತರ ನೇಮಕಾತಿ ಹೊಂದಿದ ಶಿಕ್ಷಕರುಗಳಿಗೆ ವಿಶೇಷ ಭತ್ಯೆಯನ್ನು ನೀಡಲು ಅವಕಾಶವಿರುವುದಿಲ್ಲ. |
| ಆ | ಹಾಗಿದಲ್ಲಿ, ಯಾವ ಕಾಲಿಮಿತಿಯ ಒಳಗೆ ಇವರಿಗೆ ಈ ಸೌಲಭ್ಯ ಒದಗಸಲಾಗುವುದು; ಹಾಗೂ ಮರು ಪಾವತಿಸಿಕೊಳ್ಳುವ ಆದೇಶವನ್ನು ವಾಪಸ್ಸು ಪಡೆಯಲಾಗುವುದೇ; (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |
| ಇ | 01.08/2008ರ ಪೂರ್ವದಲ್ಲಿ ನೇಮಕವಾದ ಪ್ರೌಢ ಶಾಲಾ ಶಿಕ್ಷಕರು, ಮುಖ್ಯ ಗುರುಗಳಿಗೆ ಈ ಇನ್‌ಕ್ರಿಮೆಂಟ್ ನೀಡಲು ಕಾರಣವೇನು; ಹಾಗೂ 01/08/2008ರ ನಂತರ ನೇಮಕವಾದ ಪ್ರೌಢ ಶಾಲಾ ಶಿಕ್ಷಕರು, ಮುಖ್ಯ ಗುರುಗಳಿಗೂ ಈ ಇನ್‌ಕ್ರಿಮೆಂಟ್ ಅನ್ನು ನೀಡಲು ನಿರಾಕರಿಸಲಾಗಿದೆ; (ವಿವರವಾದ ಮಾಹಿತಿ ಒದಗಿಸುವುದು) | ರಾಜ್ಯ ಸರ್ಕಾರಿ ನೌಕರರ, ಅನುದಾನಿತ ಶಿಕ್ಷಣ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ನೌಕರರ ಹಾಗೂ ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿಗಳ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಮತ್ತು ನೂತನ ವೇತನ ರಚನೆ ಇತ್ಯಾಧಿಗಳನ್ನು ರೂಪಿಸಲು, ಸರ್ಕಾರವು 5ನೇ ವೇತನ ಆಯೋಗವನ್ನು ರಚಿಸಿದೆ. 5ನೇ ವೇತನ ಆಯೋಗವು ತನ್ನ ಅಂತಿಮ ವರದಿಯನ್ನು ಸಲ್ಲಿಸುವುದನ್ನು ಕಾಯ್ದಿರಿಸಿ, ಮಾಸಿಕ ಕನಿಷ್ಟ ರೂ. 300/- ಮತ್ತು ಗರಿಷ್ಟ ರೂ.1500/ಗಳ ಮಿತಿಗೊಳಪಟ್ಟು ಮೂಲ ವೇತನದ ಶೇಕಡ 10 ರಷ್ಟು ಮಧ್ಯಂತರ ಪರಿಹಾರವನ್ನು ರಾಜ್ಯ ಸರ್ಕಾರಿ ನೌಕರರಿಗೆ, ಸ್ಥಳೀಯ ಸಂಸ್ಥೆಗಳ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನೌಕರರಿಗೆ ಹಾಗೂ ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿಗೆ ದಿನಾಂಕ:01/01/2006 ರಿಂದ ಮಂಜೂರು ಮಾಡಲು ಶಿಫಾರಸ್ಸು ಮಾಡಿದೆ. |

| | | |
|---|---|---|
| | | ದಿನಾಂಕ:01/08/2008ರ ಪೂರ್ವದಲ್ಲಿ ನೇಮಕಗೊಂಡು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಪ್ರಾಥಮಿಕ ಪ್ರೌಢಶಿಕ್ಷಣ ಇಲಾಖೆಯ ಶಿಕ್ಷಕರು ಮತ್ತು ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರುಗಳಿಗೆ ಪಡೆಯುತ್ತಿದ್ದ ವಿಶೇಷ ಭತ್ಯೆಯನ್ನು 2012ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಆಯಾ ಶಿಕ್ಷಕರಿಗೆ ಅನ್ವಯಿಸುತ್ತಿದ್ದ ವೇತನ ಶ್ರೇಣಿಯಲ್ಲಿ ದಿ:01/07/2017ರಂದು ಪಡೆಯುತ್ತಿದ್ದ ಮೂಲ ವೇತನದೊಂದಿಗೆ ವಿಲೀನಗೊಳಿಸಿದೆ.<br><br>ದಿನಾಂಕ:01/08/2008ರ ಪೂರ್ವದಲ್ಲಿ ನೇಮಕವಾದ ರಾಜ್ಯದ ಎಲ್ಲಾ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರುಗಳಿಗೆ ವಿಶೇಷ ಭತ್ಯೆ ನೀಡಲಾಗುತ್ತಿತ್ತು. ಆದರೆ, ಮುಖ್ಯ ಗುರುಗಳಿಗೆ ವಿಶೇಷ ಭತ್ಯೆಯನ್ನು ನೀಡಲು ಅವಕಾಶವಿರುವುದಿಲ್ಲ.<br><br>ಮುಖ್ಯ ಶಿಕ್ಷಕರುಗಳಿಗೆ ವಿಶೇಷ ಭತ್ಯೆಯನ್ನು ನೀಡುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ. |
| ಈ | 01/08/2008ರ ನಂತರ ನೇಮಕವಾದ ಪ್ರೌಢಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಅನುದಾನಿತ ಶಿಕ್ಷಣ ಸಂಸ್ಥೆಗಳ ಶಿಕ್ಷಕರಿಗೆ ಇನ್‌ಕ್ರಿಮೆಂಟ್ ನೀಡುವಂತೆ ನ್ಯಾಯಾಲಯದಲ್ಲಿ ದಾವೆ ಹೂಡಿರುವ ಪ್ರಕರಣಗಳು ಇದ್ದಲ್ಲಿ ಆ ಪ್ರಕರಣಕ್ಕೆ ನ್ಯಾಯಾಲಯವು ತೀರ್ಪು ನೀಡಿದ್ದು, ತೀರ್ಪಿನ ಅನ್ವಯ ಕ್ರಮವಹಿಸುವ ಕುರಿತು ಪರಿಶೀಲಿಸುವುದಾಗಿ ಸರ್ಕಾರ ತಿಳಿಸಿದ್ದು, ಈ ಕುರಿತು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಕೆ.ಎ.ಟಿ ಅರ್ಜಿ ಸಂಖ್ಯೆ:4412-4428, 4430-4444, 4446-4464, 4467-5224/2020 ಶ್ರೀ ಲಕ್ಷ್ಮೀನಾರಾಯಣ ಭಟ್ ಮತ್ತಿತರರು, ಈ ಪ್ರಕರಣದಲ್ಲಿ ದಿನಾಂಕ:01/08/2008ರ ನಂತರ ನೇಮಕಾತಿ ಹೊಂದಿರುವ ಸರ್ಕಾರಿ ಪ್ರೌಢಶಾಲಾ ಶಿಕ್ಷಕರಿಗೆ ವಿಶೇಷ ಭತ್ಯೆ ನೀಡುವ ಕುರಿತು ಘನ ನ್ಯಾಯಾಲಯವು ದಿನಾಂಕ:05/05/2021ರಂದು ಅರ್ಜಿದಾರರ ಪರವಾಗಿ ತೀರ್ಪು ನೀಡಿರುತ್ತದೆ.<br><br>ಸದರಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿನಾಂಕ: 05-05-2021ರ ತೀರ್ಪಿನ ವಿರುದ್ಧ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ದಾಖಲಿಸಲಾಗಿದೆ. |

**ಸಂಖ್ಯೆ: ಇಪಿ 203 ಎಸ್‌ಎಲ್‌ಬಿ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ
ಸಚಿವರು